


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 986 02-05-2021 ಭಾನುವಾರ

ಪ್ಲವಸಂವತ್ಸರ ಉತ್ತರಾಯಣ ವಸಂತಋತು ಚೈತ್ರಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ಷಷ್ಠಿ (ಗಂಟೆ 14.49ರ ವರೆಗೆ)

ನಕ್ಷತ್ರ : ಪೂರ್ವಾಷಾಢ (ಗಂಟೆ 08.58ರ ವರೆಗೆ)

ರಾಹುಕಾಲ : (ಗಂಟೆ 05.10 PM - 06.45 PM ವರೆಗೆ)

ಗುಳಿಕಕಾಲ : (ಗಂಟೆ 03.36 PM - 05.11 PM ವರೆಗೆ)

## ಸುಜ್ಞಾನ

ಸಾವಿರಾರು ಜನರನ್ನು ಗೆಲ್ಲುವವನು ವೀರನಲ್ಲ, ಸಾವಿರಾರು ಮನಸ್ಸುಗಳನ್ನು ಗೆಲ್ಲುವವನು ನಿಜವಾದ ವೀರ.

- ಗೌತಮ ಬುದ್ಧ

# ಚಾಣಕ್ಯ ನೀತಿ



ಲೋಭಶ್ಚೇದಗುಣೇನ ಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ
ಸತ್ಯಂ ಚೇತ್ತಪಸಾ ಚ ಕಿಂ ಶುಚಿ ಮನೋ ಯದ್ಯಸ್ತಿ ತೀರ್ಥೇನ ಕಿಮ್
ಸೌಜನ್ಯಂ ಯದಿ ಕಿಂ ಗುಣೈಃ ಸುಮಹಿಮಾ ಯದ್ಯಸ್ತಿ ಕಿಂ ಮಂಡನೈಃ
ಸದ್ವಿದ್ಯಾ ಯದಿ ಕಿಂ ಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ

ವ್ಯಕ್ತಿಯೊಬ್ಬನ ಮನಸ್ಸು ದುರಾಸೆಯಿಂದ ಕೂಡಿದ್ದರೆ ಅವನು ಕೆಡಲು ಇನ್ನೇನಾದರೂ ಕೆಟ್ಟದ್ದಾಗಬೇಕೇ? ವ್ಯಕ್ತಿಯೊಬ್ಬ ಚಾಡಿ ಹೇಳುವವನಾಗಿದ್ದರೆ ಅವನು ಪಾಪಿಯೆಂದು ಕರೆಸಿಕೊಳ್ಳಲು ಮತ್ತೇನನ್ನಾದರೂ ಮಾಡಬೇಕೇ? ವ್ಯಕ್ತಿಯೊಬ್ಬ ಸತ್ಯವಂತ ಮತ್ತು

ಗುಣವಂತನಾಗಿದ್ದರೆ ಅವನಿಗೆ ಧ್ಯಾನ ಅಥವಾ ತಪಸ್ಸಿನ ಅಗತ್ಯವಿದೆಯೇ ? ವ್ಯಕ್ತಿಯೊಬ್ಬನ ಮನಸ್ಸು ಶುದ್ಧವಾಗಿದ್ದರೆ ಅವನಿಗೆ ತೀರ್ಥಯಾತ್ರೆಗಳ ಅವಶ್ಯಕತೆಯಿದೆಯೇ? ವ್ಯಕ್ತಿ ಯೊಬ್ಬನಿಗೆ ಎಲ್ಲರನ್ನೂ ಪ್ರೀತಿಸುವುದು ತಿಳಿದಿದ್ದರೆ ಅವನಿಗೆ ಇನ್ನಾವ ಸದ್ಗುಣ ಬೇಕಿದೆ? ವ್ಯಕ್ತಿಯೊಬ್ಬ ಸ್ವತಃ ಪ್ರಸಿದ್ಧನಾಗಿದ್ದರೆ ಅವನ ಸೌಂದರ್ಯ ಹೆಚ್ಚಿಸಲು ಆಭರಣಗಳು ಬೇಕೇ ? ವ್ಯಕ್ತಿಯೊಬ್ಬ ಜ್ಞಾನವಂತನಾಗಿದ್ದರೆ ಅವನಿಗೆ ತಾನು ಶ್ರೀಮಂತ ಎಂಬ ಸಂತೋಷ ಸಿಗಲು ಸಂಪತ್ತಿನ ಅಗತ್ಯವಿದೆಯೇ ?

ಎಲ್ಲ ಪ್ರಶ್ನೆಗಳಿಗೂ ಇಲ್ಲ ಎಂಬುದೇ ಉತ್ತರ. ಒಳ್ಳೆಯ ಗುಣ, ಶುದ್ಧ ಮನಸ್ಸು, ಸನ್ನಡತೆ, ಪ್ರಸಿದ್ಧಿ ಮತ್ತು ವಿದ್ಯೆ ಇವಿಷ್ಟು ಇದ್ದರೆ ಮನುಷ್ಯನಿಗೆ ಹೆಚ್ಚೇನು ಬೇಕು ? ವ್ಯಕ್ತಿಯೊಬ್ಬ ಏನೇನನ್ನು ಬಯಸಲು ಸಾಧ್ಯವೋ ಅವೆಲ್ಲವೂ ಇವುಗಳಿಂದಲೇ ಸಿಗುತ್ತವೆ.




ಬ್ರಹ್ಮಸ್ಥಾನ ಖಾಲಿ ಇದ್ದಷ್ಟು ಫಲಿತಾಂಶ ಹೆಚ್ಚು. ಸೂರ್ಯನ ಶಕ್ತಿಯು ತುಂಬಾ ಪ್ರಭಾವ ಹೊಂದಿರುವುದರಿಂದ ಪೂರ್ವದಿಕ್ಕಿನಿಂದ ಹೆಚ್ಚು ಕಿರಣಗಳು ಒಳ ಬರುವಂತೆ ಕಿಟಕಿ, ಬಾಗಿಲುಗಳನ್ನು ಸರಿಯಾಗಿ ತೆರೆದಿಡಬೇಕು.

ಚೌಕಾಕಾರ ಅಥವಾ ಆಯತಾಕಾರವಾಗಿರುವ

ನಿವೇಶನಗಳಲ್ಲಿ ವಾಸ್ತುಶಕ್ತಿ ಪ್ರಬಲವಾಗಿರುತ್ತದೆ.

ಪೂರ್ವಾಭಿಮುಖವಾಗಿರುವ ಮನೆಯ ವಾಯುವ್ಯ ದಿಕ್ಕು ಬೆಳೆದು, ಪೂರ್ವಾಗ್ನೆಯಕ್ಕೆ ಮುಖ್ಯದ್ವಾರ ಇರುವ ಮನೆಗಳಲ್ಲಿ ಪ್ರೇತಭಾದೆ, ಅಗ್ನಿಭಯ, ಕಳ್ಳರಭಯ ಇರುತ್ತದೆ.

ಪೂರ್ವಕ್ಕಿಂತ ಪಶ್ಚಿಮ ತಗ್ಗಾಗಿದ್ದು, ಪೂರ್ವಾಈಶಾನ್ಯ ದಲ್ಲಿ ಅಡುಗೆ ಕೋಣೆ ಇದ್ದರೆ ಅಂತಹ ಮನೆಯಲ್ಲಿ ವಾಸಿಸುವವರಿಗೆ ನೇತ್ರರೋಗ ಭಾದಿಸುತ್ತದೆ.

ಪಶ್ಚಿಮ ಆವರಣ ಗೋಡೆಗಿಂತಲೂ, ಪೂರ್ವ ಆವರಣ ಗೋಡೆ ಎತ್ತರವಾಗಿದ್ದರೆ ಅಭಿವೃದ್ಧಿ ಕುಂಠಿತಗೊಳ್ಳುವುದರ ಜೊತೆಗೆ ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆಯಾಗುತ್ತದೆ.

# ಭೃಗು ನಂದಿ ನಾಡಿ

## ವಿದ್ಯೆಗೆ ಸರಿಯಾದ ಉದ್ಯೋಗ ಇಲ್ಲದ ಜಾತಕ



| | | | |
|---|---|---|---|
| | | ಕುಜ | ಕೇತು<br>ಶನಿ |
| ಬುಧ<br>ಗುರು ರವಿ | ಪುರುಷ ಜಾತಕ<br>ಗ್ರಹ ಕುಂಡಲಿ | | ಚಂದ್ರ |
| ಶುಕ್ರ | | | |
| ರಾಹು | | | |

ಜೀವಕಾರಕನಾದ ಗುರುವು ಕುಂಭರಾಶಿಯಲ್ಲಿ ರವಿ - ಬುಧರೊಂದಿಗೆ ಸ್ಥಿತನಾಗಿರುವನು. ಕುಂಭದೊಳಗೆ ಈ ಮೂರು ಗ್ರಹರಿರುವುದರಿಂದ ಈ ಜಾತಕನು ರಹಸ್ಯ ವಿದ್ಯೆಗಳನ್ನು ಕಲಿಯುವನು. ಬುಧಾದಿತ್ಯರೊಂದಿಗೆ ಜೀವಕಾರಕ ಗುರು ಇರುವುದರಿಂದ ಮಾತಿನಲ್ಲಿ ಮೋಡಿ ಮಾಡಿ ತನ್ನ ಕೆಲಸಕಾರ್ಯಗಳನ್ನು ಪೂರ್ಣಗೊಳಿಸಬಲ್ಲ ಚಾಣಾಕ್ಷನೀತ.



ರವಿ - ತೇಜಸ್ಸು, ಬುಧ - ಆಕರ್ಷಣೆ. ಜೀವಕಾರಕನಾದ ಗುರುವಿನೊಂದಿಗೆ ಬುಧಾದಿತ್ಯರಿವುದರಿಂದ ಎಂತಹ ಬಲಿಷ್ಠ ವ್ಯಕ್ತಿಗಳನ್ನು ತನ್ನಡೆಗೆ ಆಕರ್ಷಿಸಬಲ್ಲ. ಈತನ ಮುಖವು ವಿಶೇಷವಾದ ತೇಜಸ್ಸಿನಿಂದ ಕೂಡಿರುತ್ತದೆ.

ಕರ್ಮಕಾರಕನಾದ ಶನಿಯು ತನ್ನ ಶತೃವಾದ



ವೈರಾಗ್ಯ ಕಾರಕನಾದ ಕೇತುವಿನೊಂದಿಗೆ ಇರುವನು. ಶನಿಗೆ ದ್ವಿತೀಯದಲ್ಲಿ ಚಂಚಲ ಕಾರಕನಾದ ಚಂದ್ರನು ಇರುವುದರಿಂದ ಈತ ಯಾವ ವೃತ್ತಿಯನ್ನೂ ಮಾಡಿದರೂ ಅಭಿವೃದ್ಧಿಯು ಕುಂಠಿತವಾಗುವುದು. ಅರ್ಹತೆಗೆ ಸರಿಯಾದ ಉದ್ಯೋಗ ಸಿಗುವುದಿಲ್ಲ.

ಶನಿಯು ಬುಧನೊಡನೆ ಪರಿವರ್ತನೆ ಹೊಂದಿರುವನು. ಬುಧನೊಂದಿಗೆ ಗುರು + ರವಿ ಇರುವುದರಿಂದ ಶನಿಗೆ ಗುರು + ರವಿಯ ಸಂಯೋಗ ಉಂಟಾಗಿರುತ್ತದೆ. ಈ ಕಾರಣದಿಂದ ಈತನು ದೊಡ್ಡವರ (ರವಿ – ಅಧಿಕಾರ ಕಾರಕ) ಸಹವಾಸವನ್ನು ಮಾಡಿ ಎಲ್ಲಾ ಸುಖ – ಭಾಗ್ಯಗಳನ್ನು ಅನುಭವಿಸುವನು. ಆದರೆ ತನ್ನದಾಗಿ

ಯಾವುದೇ ಸುಖಲಾಭಗಳನ್ನು ಕಾಣಲಾರನು.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ
ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com